**ಶ್ರೀ ಕೆ. ಜಿ. ಭಟ್‌ಸೂರಿ***

# ಉತ್ತರ ಕನ್ನಡ ಜಿಲ್ಲೆಯ ಕಾಷ್ಟ ಶಿಲ್ಪಕಲೆ-ಒಂದು ಟಿಪ್ಪಣಿ

ಕರ್ನಾಟಕ, ಅದರಲ್ಲೂ ಉತ್ತರ ಕನ್ನಡ ಜಿಲ್ಲೆ ಹಲವು ತೆರನಾದ ಕಲೆಗಳ ತವರೂರು. ರೂವಾರಿ ತನ್ನ ಕಲೆಯ ನಿರ್ಮಾಣಕ್ಕೆ ಮರವನ್ನಾಗಲೀ, ಕಲ್ಲನ್ನಾಗಲೀ ಅಥವಾ ಮಣ್ಣನ್ನಾಗಲೀ ಬಳಸಿ ಒಂದು ಆಕೃತಿಯನ್ನೋ ಅಥವಾ ಒಂದು ಸಾಂಕೇತಿಕ ಮೂರ್ತಿಯನ್ನೋ ನಿರ್ಮಿಸುತ್ತಾನೆ. ಹೀಗೆ ನಿರ್ಮಿಸುವ "ಶಿಲ್ಪಕಲೆ ಬರೀ ಪ್ರತಿಮೆ ಅಥವಾ ದೇವತೆಯ ವಿಗ್ರಹವನ್ನು ರೂಪಿಸುವ ಕಲೆಗೆ" ಸೀಮಿತವಾಗಿಲ್ಲ. ತನ್ನ ಮನಸ್ಸಿನ ಭಾವನೆಗಳನ್ನು ಒಂದು ಸ್ಥಿರ ಮಾಧ್ಯಮದ ಮೂಲಕ ತೋರಿಸುವುದುಂಟು.[1] ಒಂದಲ್ಲ ಒಂದು ರೀತಿಯಿಂದ ಸೌಂದರ್ಯ ಪ್ರಜ್ಞೆ, ಉಪಯುಕ್ತತೆ ಮತ್ತು ಆಧ್ಯಾತ್ಮಿಕತೆಯ ಸಮನ್ವಯ ಧರ್ಮವು ಕಲೆಯಲ್ಲಿ ಕಾಣುವ ವೈಶಿಷ್ಟ್ಯ. ಇಲ್ಲಿ ಗುಡಿಗಾರಿಕೆ ಅಥವಾ ಗುಡಿಗಾರರ ಕಲೆಯನ್ನು ಪ್ರಧಾನವಾಗಿರಿಸಿಕೊಂಡು ಅವರ ಕಲಾ ಸಂಪ್ರದಾಯವನ್ನು ಉತ್ತರ ಕನ್ನಡ ಜಿಲ್ಲೆಗೆ ಸೀಮಿತ ಮಾಡಿ, ಒಂದು ಪರಿಚಯವನ್ನು ಮಾತ್ರ ಇಲ್ಲಿ ಮಾಡುತ್ತಿದ್ದೇನೆ.

ಗಂಧದ ಕೆತ್ತನೆ, ಬೆಂಡಿನಹಾರ, ತುರಾಯಿ (ಸುಗ್ಗಿ ಕುಣಿತದಲ್ಲಿ ಬಳಸುವ ಬೆಂಡಿನ ತುರಾಯಿ) ಗುಡಿಗೋಪುರದ ಮರದ ವಿನ್ಯಾಸ, ಶಿಲ್ಪಕಲೆ, ಸ್ಥಂಬಗಳ ನಿರ್ಮಾಣ, ಕೆಲವು ಅಲಂಕೃತ ಗೃಹೋಪಯೋಗಿ ಪೀಠೋಪಕರಣ ಭಿತ್ತಿಫಲಕ ಮುಂತಾದವುಗಳಲ್ಲಿ ಈ ಗುಡಿಗಾರ ಕಲಾಕೌಶಲ್ಯ ಎದ್ದು ಕಾಣುತ್ತದೆ.

ಮರದ ಕೆತ್ತನೆಕಲೆಯ ಸಂಪ್ರದಾಯ ಹೆಚ್ಚಿನ ಮಟ್ಟಿಗೆ ದೇವಾಲಯ ರಥಗಳಲ್ಲಿ ಕಾಣಬಹುದು. ರಥಗಳ ಪಟ್ಟಿಕೆಯಲ್ಲ ರಾಮಾಯಣ, ಮಹಾಭಾರತ ಹಾಗೂ ಪೌರಾಣಿಕ ವಿಷಯಕ್ಕೆ ಸಂಬಂಧಪಟ್ಟ ಕಥಾನಕಗಳು, ಯಾಳಿ, ಶಾರ್ದೂಲ, ಗಜ ಮತ್ತು ಹಂಸಗಳ ಕಲಾತ್ಮಕ ನಿರೂಪಣೆ ಕಂಡು ಬರುತ್ತದೆ. ಉದಾಹರಣೆಗಾಗಿ ಕುಮಟಾ ತಾಲ್ಲೂಕಿನ ಧಾರೇಶ್ವರ ದೇವಾಲಯ, ಶಿರಸಿ ತಾಲ್ಲೂಕಿನ ಬನವಾಸಿ, ಹೊನ್ನಾವರದ ರಾಮಮಂದಿರದ ಹೊರಾವರಣದಲ್ಲಿ ನಿಲ್ಲಿಸಿರುವ ರಥ, ಇವುಗಳಲ್ಲಿ ಇಂಥ ಕೆಲವು ಅಪೂರ್ವ ಕಲಾಕೃತಿಗಳು ಪ್ರತಿಬಿಂಬಿತವಾಗಿವೆ. ಹಿಂದಿನ ಸೂಪಾ ತಾಲ್ಲೂಕಿನ (ಇಂದಿನ ಜೋಯಡಾ) ದೂಧಗಾಳಿಯಲ್ಲಿ ರಾಮೇಶ್ವರ ದೇವಾಲಯಗಳ ಸ್ತಂಬದ ಮೇಲೆ ದಶಾವತಾರ ಮತ್ತು ಕಾಮಸೂತ್ರದ ಸ್ವಾರಸ್ಯಕರ ಪಟ್ಟಿಕೆ ಇದೆ. ಕುಮಟಾದ ಮಹಾಲಸ ನಾರಾಯಣ ದೇವಾಲಯದ ಭುವನೇಶ್ವರಿಯು ಸುಂದರ ಕೆತ್ತನೆಯಿಂದೊಡಗೂಡದೆ.

ಮುರುಡೇಶ್ವರದಿಂದ ಒಂದೂವರೆ ಕಿ. ಮೀ.

* ಶಾಸನ ತಜ್ಞ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು-೫೭೦ ೦೦೧

1 ಶಿವರಾಮ ಕಾರಂತ, ಕೆ. ೧೯೭೫ : ಭಾರತೀಯ ಶಿಲ್ಪ ಬೆಂಗಳೂರು ವಿಶ್ವವಿದ್ಯಾನಿಲಯ ಬೆಂಗಳೂರು ಪುಟ-೧

ಅಂತರದಲ್ಲಿ ತೂದಳವೇ ನದಿಯ ದಂಡೆಯ ಮೇಲೆ ಮರದಿಂದ ಕೆತ್ತಲ್ಪಟ್ಟ ಹದಿನಾರು ಮೂರ್ತಿಗಳು ದೊರೆತಿವೆ.[2] ಇವುಗಳಲ್ಲಿ ಮುಖ್ಯವಾದುದು ನೇತ್ರಾಣಿ ಜಟಕ. ನೇತ್ರಾಣಿ ಬಹುಶ: ಸಮೀಪದ ಗುಡ್ಡದ ಹೆಸರಿರಬೇಕು. ನೇತ್ರಾಣಿ ಜಟಕ ಎನ್ನುವ ಮಾತು ನೇತ್ರಾಣಿ ಗುಡ್ಡದ ಪಾಲಕನಿರಬೇಕು. ನೇತ್ರಾಣಿ ಜಟಕ ೧೨೦ ಸೆಂ. ಮೀ. ಎತ್ತರವಿದ್ದು, ನಿಂತಭಂಗಿಯಲ್ಲಿದ್ದು, ತಲೆಯ ಮೇಲೆ ಹಾವಿನ ಹೆಡೆಯಿದೆ. ಕೈಯಲ್ಲಿ ದಾಂಡು ಹಿಡಿದಿದೆ. ಗಡ್ಡ, ಮೀಸೆ ಎದ್ದು ಕಾಣುತ್ತದೆ. ವೀರಮಾಸ್ತಿ, ಮಲ್ಲಿಮಾಸ್ತಿ ಮತ್ತು ಮಾಮಾಸ್ತಿ ನೇತ್ರಾಣಿ ಜಟಕನ ಪತ್ನಿಯರು. ಐದನೆಯದು ಬಾಳಬಂಟ, ಆರನೆಯದು ಕುದುರೆ ವೀರಪ್ಪನೆಂದು, ಲೋಕಾರೂಢಿಯಲ್ಲಿರುವ ಮಾತು. ಕುದುರೆ ವೀರಪ್ಪ ಹೆಸರಿಗೆ ತಕ್ಕಂತೆ ಕುದುರೆಯ ಮೇಲೆ ಕುಳಿತು ಸವಾರಿ ಮಾಡುತ್ತಿರುವ ದೈವವಾಗಿದ್ದು, ನಿಜಕ್ಕೂ ಸುಂದರವಾಗಿದೆ. ಈತ ಉದ್ದನೆಯ ನಿಲುವಂಗಿ ಧರಿಸಿದ್ದಾನೆ. ಟೋಪಿಯನ್ನು ಧರಿಸಿದ ರೀತಿ ಇಂಗ್ಲೀಷ್ 'ಹ್ಯಾಟ್' ಮಾದರಿಯದು. ಏಳನೆಯದು ಯಕ್ಷಿಕಂಬ ಈ ಕಂಬದ ಸುತ್ತಲೂ ಹಾವಿನ ಹೆಡೆಯ ಲಾಂಛನವಿದೆ. ಇದರ ಹೊರತಾಗಿ ಮಾಸ್ತಿ ಮನೆಯಲ್ಲಿ ಇನ್ನೂ ಮೂವತ್ತು ಮರದ ಮೂರ್ತಿಗಳಿವೆ. ಇವುಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಹಾಗೇ ಕಲಾತ್ಮಕತೆಯ ದೃಷ್ಟಿಯಿಂದ ಮತ್ತು ಪ್ರಾದೇಶಿಕ ಜಾನಪದದ ಐತಿಹ್ಯದ ದೃಷ್ಟಿಯಿಂದ ಮಹತ್ವದ್ದಾಗಿದೆ.

ಕರ್ನಾಟಕ ವಿಶ್ವವಿದ್ಯಾನಿಲಯದ ವಸ್ತು ಸಂಗ್ರಹಾಲಯದಲ್ಲಿ ೧೬–೧೭ನೇ ಶತಮಾನಕ್ಕೆ ಸೇರಿದ ಕಿನ್ನರಿ, ಮೂಲತ : ಹೊನ್ನಾವರ ತಾಲ್ಲೂಕಿನ ಔಂಸ ಹಳ್ಳಿ ಗ್ರಾಮಕ್ಕೆ ಸೇರಿದೆ. ಇದು ೪೦ ಸೆಂ. ಮೀ. ಎತ್ತರವಿದ್ದು, ಕೈಬಳೆ, ತೋಳಬಂದಿ, ಕಿರೀಟ ಮತ್ತು ಆಭರಣಗಳಿಂದ ಅಲಂಕರಿಸಲ್ಪಟ್ಟಿವೆ. ಮೇಲ್ಭಾಗ ಹೆಂಗಸಿನ ರೂಪ, ಕೆಳಭಾಗ ಒಂದು ಪಕ್ಷಿಯ ಬಾಲದಂತಿದ್ದು ಮೇಲಕ್ಕೇರಿ ನಿಂತಿದ್ದು, ನೃತ್ಯ ಭಂಗಿಯಲ್ಲಿದೆ. ಕಿನ್ನರಿ ಧರಿಸಿದ ಕಿವಿಯೋಲೆಯ ಮೇಲ್ಭಾಗದಲ್ಲಿ ಬುಗುಡಿಯಾಕಾರ ಮತ್ತು ಎರಡು ಕಿವಿಗೂ ಲೋಲಕ ಮತ್ತು ಕೆಳಭಾಗದಲ್ಲಿ ಬೆಂಡೋಲೆ ಧರಿಸಿದೆ. ಕೊರಳಲ್ಲಿ ಹಲವಾರು ಪದಕಗಳಿವೆ. ಎಡಗೈಯಲ್ಲಿ ಉದ್ದ ದಂಟಿನ ಮೊಗ್ಗನ್ನು ಹಿಡಿದಿದೆ. ಎಡಕ್ಕೆ ತುಸು ವಾಲಿವಂತಿದೆ. ಬಲಗೈ ಮುಂದಿದೆ. ಕೆಳಭಾಗದಲ್ಲಿ ಕಟಿಬಂಧ ಮತ್ತಿತರ ಟೊಂಕದ ಆಭರಣಗಳಿವೆ. ಹಣೆಯಲ್ಲಿ ನಾಮದ ಲಂಬಾಕಾರದ ಗುರುತಿದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಗ್ರಾಮದೇವಿ ಪೂಜೆ ಹೆಚ್ಚು ಪ್ರಚಲಿತವಿದೆ. ಉದಾಹರಣೆಗಾಗಿ ಶಿರಸಿ ಮಾರಿಕಾಂಬೆ. ಮರಗೆತ್ತನೆಯ ಕಲಾಕೌಶಲ್ಯಕ್ಕೆ ಇದೊಂದು ಉತ್ತಮ ನಿದರ್ಶನ. ಸುಮಾರು ನಾಲ್ಕು ಮೀ. ಎತ್ತರದ ಈ ಮೂರ್ತಿ ನಿಂತ ಭಂಗಿಯಲ್ಲಿದ್ದು ಅಷ್ಟಭುಜಳಾಗಿ ಆಯುಧಗಳನ್ನು ಹಿಡಿದಿದ್ದಾಳೆ. ಈಕೆ ಸಿಂಹ ವಾಹನೆ. ಈ ಸುಂದರ ಮೂರ್ತಿಯ ಮುಖ ಭಾವದಲ್ಲಿ ಶಕ್ತಿ ಸ್ವರೂಪ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಮಾರೆಮ್ಮ ಮೂಲತಃ ಈ ಭಾಗದ ಜನಪ್ರಿಯ ಗ್ರಾಮ ದೇವತೆ.[3]

ಒಟ್ಟನಲ್ಲಿ ಮರದ ಕೆತ್ತನೆಯ ಈ ಕಲಾತ್ಮಕ ಕೃತಿಗಳು ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಇದು ವಾಸ್ತವವಾಗಿ ಉತ್ತರ ಕನ್ನಡದ ಗುಡಿಗಾರರ ಶ್ರೀಮಂತ ಕಲಾಪರಂಪರೆಯನ್ನು ಪ್ರತಿನಿಧಿಸುತ್ತದೆ. ಇಲ್ಲಿ ಕೆಲವು ಮೂರ್ತಿಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗದಿದ್ದರೂ ಕಲಾತ್ಮಕ ಕೆತ್ತನೆಯ ದೃಷ್ಟಿಯಿಂದ ಉತ್ತರ ಕನ್ನಡ ಜಿಲ್ಲೆ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ ಎಂಬುದು ಸ್ಪಷ್ಟವಾಗುತ್ತದೆ. ಸ್ಥಳೀಯವಾಗಿ ಲಭ್ಯವಿರುವ ಮರಮುಟ್ಟುಗಳು ಈ

---

2 Panchamukhi, R. S. 1941 : Annual Report on Kannada Research in Bombay Province for the year 1939-40, Dharwar, P. 28.

3 Bhat Soori, K. G 1987 : Art and Architecture of North Kanara (Early Medieval Phase) (Unpublished Ph. D., Thesis) University of Mysore, PP. 301-303.

ಬಗೆಯ ಕಲೆಗಾರಿಕೆ ಬೆಳೆದು ಬರಲು ಪೂರಕವಾಗಿರಬಹುದು. ಇಷ್ಟಾದರೂ ಈ ಕಲಾಪರಂಪರೆಯಲ್ಲಿ ಆಗಮೋಕ್ತ ಪ್ರತಿಮಾ ಲಕ್ಷಣದ ಎಲ್ಲ ವಿವರಗಳು ಶಾಸ್ತ್ರಬದ್ಧವಾಗಿ ಪಡೆದಿದೆ ಎಂದು ಹೇಳಲಾಗುವುದಿಲ್ಲ. ಅಂತೆಯೇ ಇವುಗಳನ್ನು ಆಯಾ ಪ್ರದೇಶದ ವಿಶಿಷ್ಟ ಕಲೆಯಾಗಿ ಪ್ರತ್ಯೇಕವಾಗಿ ಅಧ್ಯಯನ ಮಾಡುವುದು ಅಗತ್ಯ ಎಂದು ತೋರಿಸುವುದಷ್ಟೆ ಈ ಪ್ರಬಂಧದ ಉದ್ದೇಶ.

---

ಈ ಲೇಖನವನ್ನು ಬರೆಯುವಾಗ ಸಲಹೆ ನೀಡಿದ ಡಾ: ಹೆಚ್. ರಘುನಾಥ್ ಭಟ್‌ರವರಿಗೆ ನನ್ನ ಕೃತಜ್ಞತೆಗಳು.